# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 426

ಸದಸ್ಯರ ಹೆಸರು : ಶ್ರೀ ಎಂ.ಎ.ಗೋಪಾಲಸ್ವಾಮಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಉತ್ತರಿಸಬೇಕಾದ ದಿನಾಂಕ : 16-12-2021

ಉತ್ತರಿಸಬೇಕಾದ ಸಚಿವರು : ಮಾನ್ಯ ಮುಖ್ಯ ಮಂತ್ರಿಗಳು

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | 6ನೇ ವೇತನ ಆಯೋಗದ 2ನೇ ಸಂಪುಟದಲ್ಲಿ ಯಾವೆಲ್ಲಾ ವಿಷಯದ ಬಗ್ಗೆ ಶಿಫಾರಸ್ಸು ಮಾಡಲಾಗಿದೆ; (ವಿವರ ನೀಡುವುದು) | 6ನೇ ರಾಜ್ಯ ವೇತನ ಆಯೋಗವು ತನ್ನ ವರದಿಯ 2ನೇ ಸಂಪುಟದಲ್ಲಿ ಕೆಲವೊಂದು ಇಲಾಖೆಗಳಲ್ಲಿನ ಹುದ್ದೆಗಳ ವೇತನ ಶ್ರೇಣಿಗಳನ್ನು ಮೇಲ್ದರ್ಜೆಗೇರಿಸುವ ಶಿಫಾರಸ್ಸುಗಳೂ ಸೇರಿದಂತೆ ಸರ್ಕಾರದ ವಿವಿಧ ಇಲಾಖೆಗಳ ಕಾರ್ಯ ಕ್ಷಮತೆಯನ್ನು ಉತ್ತಮಪಡಿಸುವ ನಿಟ್ಟಿನಲ್ಲಿ ಕೆಲವು ಇಲಾಖೆಗಳ ಮತ್ತು ಹುದ್ದೆಗಳ ವಿಲೀನಾತಿ, ಹೊಸ ವೃಂದಗಳ ಸೃಜನೆ ಮುಂತಾದಂತೆ ಸರ್ಕಾರದ ಇಲಾಖೆಗಳ ಮತ್ತು ಸೇವೆಗಳ ಪುನರ್‌ರಚನೆ, ಸಿಬ್ಬಂದಿ ನೇಮಕಾತಿ ಪ್ರಾಧಿಕಾರದ ಸ್ಥಾಪನೆ, ಹೊಸ ತರಬೇತಿ ಕೇಂದ್ರಗಳ ಸ್ಥಾಪನೆ, ಸರ್ಕಾರಿ ನೌಕರರ ಮತ್ತು ಇಲಾಖೆಗಳ ಉತ್ಪಾದಕತೆಯನ್ನು ಹೆಚ್ಚಿಸಲು ಸಾಮರ್ಥ್ಯ ವೃದ್ಧಿ ಮತ್ತು ಪ್ರೋತ್ಸಾಹಕ ಯೋಜನೆಗಳನ್ನು ಅನುಷ್ಠಾನಗೊಳಿಸುವುದು, ಇಲಾಖೆಗಳ ಕಾರ್ಯಸ್ಥಿತಿ, ಕಾರ್ಯ ವಿಧಾನಗಳು ಇತ್ಯಾದಿಗಳ ಸುಧಾರಣೆ, ಮಾನವ ಸಂಪನ್ಮೂಲದ ನಿರ್ವಹಣೆ ಮುಂತಾದ ಆಡಳಿತ |

| | | |
|---|---|---|
| | | ಸುಧಾರಣಾ ವಿಷಯಗಳ ಬಗ್ಗೆ ಶಿಫಾರಸ್ಸು ಮಾಡಿರುತ್ತದೆ. |
| (ಆ) | 6ನೇ ವೇತನ ಆಯೋಗವು ಸಲ್ಲಿಸಿರುವ 2ನೇ ಸಂಪುಟದ ಶಿಫಾರಸ್ಸುಗಳನ್ನು ಅಧ್ಯಯನ ಮಾಡಲು ರಚಿಸಿರುವ ಸಮಿತಿಯು ಸರ್ಕಾರಕ್ಕೆ ವರದಿ ಸಲ್ಲಿಸಿದೆಯೇ; ಸಲ್ಲಿಸಿದ್ದಲ್ಲಿ, ಸಮಿತಿಯು ಸಲ್ಲಿಸಿರುವ ಅಧ್ಯಯನ ವರದಿಯ ವಿವರಗಳೇನು; (ಈ ವರದಿಯ ಮೇಲೆ ಸರ್ಕಾರ ಕೈಗೊಂಡಿರುವ ಕ್ರಮಗಳ ಬಗ್ಗೆ ಮಾಹಿತಿ ನೀಡುವುದು) | ವಿವಿಧ ಇಲಾಖೆಗಳ ವಿವಿಧ ವರ್ಗದ ಹುದ್ದೆಗಳ ವೇತನ ಶ್ರೇಣಿಗಳನ್ನು ಮೇಲ್ದರ್ಜೆಗೇರಿಸುವ ಮತ್ತು ಕೆಲವೊಂದು ವರ್ಗದ ಹುದ್ದೆಗಳಿಗೆ ವಿಶೇಷ ಭತ್ಯೆ ಮಂಜೂರು ಮಾಡುವ ಕುರಿತು 6ನೇ ರಾಜ್ಯ ವೇತನ ಆಯೋಗದ ವರದಿಯ 2ನೇ ಸಂಪುಟದಲ್ಲಿನ ಶಿಫಾರಸ್ಸುಗಳನ್ನು ಪರಿಶೀಲಿಸಲು ರಚಿಸಲಾಗಿದ್ದ ಅಧಿಕಾರಿ ಸಮಿತಿಯ ವರದಿಯು ಪ್ರಸ್ತುತ ಸರ್ಕಾರದ ಪರಿಶೀಲನೆಯಲ್ಲಿರುತ್ತದೆ.<br><br>ಅಧಿಕಾರಿ ಸಮಿತಿಯ ವರದಿಯನ್ನು ಪರಿಶೀಲಿಸಿ ನಿಯಮಾನುಸಾರ ಸೂಕ್ತ ತೀರ್ಮಾನ ಕೈಗೊಳ್ಳಲಾಗುವುದು. |
| (ಇ) | ಯಾವ ಕಾಲಮಿತಿಯೊಳಗೆ 2ನೇ ಸಂಪುಟದ ಶಿಫಾರಸ್ಸುಗಳನ್ನು ಜಾರಿಗೊಳಿಸಲಾಗುವುದು? | ಮೇಲಿನ ಉತ್ತರದಿಂದಾಗಿ ಉದ್ಭವಿಸುವುದಿಲ್ಲ. |

ಸಂಖ್ಯೆ:ಆಇ 37 ಎಸ್‌ಆರ್‌ಪಿ 2021

(ಬಸವರಾಜ ಬೊಮ್ಮಾಯಿ)
ಮುಖ್ಯಮಂತ್ರಿ